# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 808
**ಸದಸ್ಯರ ಹೆಸರು** : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
**ಉತ್ತರಿಸಬೇಕಾದ ದಿನಾಂಕ** : 20.12.2021
**ಉತ್ತರಿಸುವ ಸಚಿವರು** : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮದಲ್ಲಿ ನ್ಯಾಯಾಲಯಕ್ಕೆ ಹೋದ ನೌಕರರು ಯಾರು ಯಾರು; ಸದರಿಯವರು ಸಂಸ್ಥೆಯಲ್ಲಿ ಮಾನವ ಶಕ್ತಿ ಮತ್ತು ಕಂಪನಿ ಗುತ್ತಿಗೆಯಡಿ ಯಾವ ದಿನಾಂಕದಿಂದ ಕೆಲಸ ನಿರ್ವಹಿಸುತ್ತಿದ್ದಾರೆ; (ವಿವರವಾದ ಮಾಹಿತಿ ನೀಡುವುದು) | ಇಂಧನ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಲ್ಲಿ ನ್ಯಾಯಾಲಯಕ್ಕೆ ಹೋದ ನೌಕರರ ವಿವರಗಳನ್ನು ಹಾಗೂ ಸದರಿಯವರು ಮಾನವ ಶಕ್ತಿ ಮತ್ತು ಕಂಪನಿ ಗುತ್ತಿಗೆಯಡಿ ಕಾರ್ಯ ನಿರ್ವಹಿಸಿದ ವಿವರಗಳನ್ನು ಅನುಬಂಧದಲ್ಲಿ ಒದಗಿಸಿದೆ. ಈ ನೌಕರರು 2009 ರಿಂದ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿಲ್ಲ. |
| ಆ) | ಸದರಿಯವರನ್ನು ಕರ್ತವ್ಯದಿಂದ ಬಿಡುಗಡೆ ಮಾಡಿದ್ದು, ಯಾವಾಗ; ಇದರ ಸಂಸ್ಥೆಯು ತಪ್ಪು ಮಾಹಿತಿ ನೀಡಿರುವುದು ನಿಜವೇ; | ಸದರಿಯವರಿಗೆ ಜನವರಿ 2009 ರವರೆಗೆ ಗುತ್ತಿಗೆ ವೇತನ ನೀಡಿದೆ. ಮುಂದುವರೆದು, ಫೆಬ್ರವರಿ, 2009 ಮತ್ತು ಮಾರ್ಚ್ 2009 ತಿಂಗಳುಗಳಲ್ಲಿ ಅಲ್ಪಾವಧಿಗಾಗಿ ಗುತ್ತಿಗೆ ಬಿಲ್ಲುಗಳು ಪಡೆದು ವೋಚರ್‌ಗಳ ಮೂಲಕ ಪಾವತಿಸಿರುವುದು ಕಂಡುಬರುತ್ತದೆ. ತದನಂತರ ಸದರಿಯವರ ಸೇವೆಯನ್ನು ಮುಂದುವರಿಸಿರುವುದಿಲ್ಲ.<br><br>ಇದರ ಬಗ್ಗೆ ಸಂಸ್ಥೆಯು ತಪ್ಪು ಮಾಹಿತಿ ನೀಡಿರುವುದಿಲ್ಲ. |
| ಇ) | ತಪ್ಪು ಮಾಹಿತಿ ನೀಡಿದ ಸಿಬ್ಬಂದಿ ಮೇಲೆ ಇನ್ನು ಕ್ರಮ ಕೈಗೊಳ್ಳದಿರಲು ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಕ್ರಮ ಕೈಗೊಳ್ಳಲಾಗುವುದು; | ಅನ್ವಯಿಸುವುದಿಲ್ಲ. |
| ಈ) | 240 ದಿನ ಕೆಲಸ ನಿರ್ವಹಿಸಿದ 4 ಜನರನ್ನು ಖಾಯಂ ಮಾಡಿರುವುದು ಉಮಾದೇವಿ ಪ್ರಕರಣ ಅನ್ವಯವಾಗುವುದಿಲ್ಲವೇ? (ವಿವರವಾದ ಮಾಹಿತಿ ನೀಡುವುದು) | ಇಂಧನ ಇಲಾಖೆಯ ಅಡಿಯಲ್ಲಿ ಬರುವ ನಿಗಮಗಳಾದ ಕೆ.ಪಿ.ಟಿ.ಸಿ.ಎಲ್ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ, ವ್ಯವಸ್ಥಾಪಕ ನಿರ್ದೇಶಕರಿಗೆ ಹಾಗೂ ಕಾರ್ಯಕಾರಿ ನಿರ್ದೇಶಕರಿಗೆ ಗೃಹ ಪರಿಚಾರಕರ ಸೇವೆ ಸೌಲಭ್ಯ ನೀಡುವ ಅವಕಾಶ ಕಲ್ಪಿಸಲಾಗಿದ್ದು, ಈ ವಿಧಾನದಂತೆ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರಿಗೆ ಗೃಹ ಪರಿಚಾರಕರ ಸೇವೆ ನೀಡುವ ವಿಷಯ ದಿನಾಂಕ: 04.06.2014 ರಂದು ನಡೆದ 73ನೇ ನಿರ್ದೇಶಕ ಮಂಡಳಿ ಸಭೆಯಲ್ಲಿ ಅನುಮೋದಿಸಲಾಗಿದೆ.<br><br>ಮುಂದುವರೆದು, ಸಂಸ್ಥೆಯ ಅಧ್ಯಕ್ಷರಿಗೆ ಗೃಹ ಪರಿಚಾರಕರ ಸೇವೆ ನೀಡುವ ವಿಷಯ ದಿನಾಂಕ: 28.10.2016 ರಂದು ನಡೆದ 82ನೇ ಮಂಡಳಿ ಸಭೆಯಲ್ಲಿ ಅನುಮೋದಿಸಲಾಗಿದೆ. |

| | | |
|---|---|---|
| | | ಸದರಿ ಅನುಮೋದನೆಗಳಂತೆ 240 ದಿನಗಳಿಗಿಂತ ಹೆಚ್ಚಿನ ದಿನ ಗೃಹ ಪರಿಚಾರಕರಾಗಿ ಸೇವೆ ಸಲ್ಲಿಸಿರುವವರನ್ನು ಮಾತ್ರ ಮಂಡಳಿ ಅನುಮೋದನೆ ಪಡೆದು ಗ್ರೂಪ್ – ಡಿ ಸೇವೆಯಲ್ಲಿ ವಿಲೀನ ಗೊಳಿಸಲಾಗಿದ್ದು, ಇತರ ಸೇವೆ ಒದಗಿಸುವ ಸಿಬ್ಬಂದಿಗಳಿಗೆ ಅನ್ವಯಿಸುವುದಿಲ್ಲ. |

ಸಂಖ್ಯೆ: ಎನರ್ಜಿ 277 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು

ಅನುಬಂಧ

ಸಂಸ್ಥೆಯಲ್ಲಿ ಹೊರಗುತ್ತಿಗೆ ಮತ್ತು ಕಂಪನಿ ಗುತ್ತಿಗೆಯಡಿ ಕಾರ್ಯ ನಿರ್ವಹಿಸುತ್ತಿದ್ದ ನೌಕರರ ವಿವರ:

| ಕ್ರಮ ಸಂಖ್ಯೆ | ಹೆಸರು | ಹೊರಗುತ್ತಿಗೆ ಆಧಾರದ ಮೇಲೆ ಸೇರಿ ದಿನಾಂಕ | | ಗುತ್ತಿಗೆ ಆಧಾರದ ಮೇಲೆ ಸೇರಿ ದಿನಾಂಕ | |
|---|---|---|---|---|---|
| | | ರಿಂದ | ವರೆಗೆ | ರಿಂದ | ವರೆಗೆ |
| 1 | ಸುಧೀರ್ ಕುಮಾರ್ | ---- | ---- | 12.09.2005 | 2009 |
| 2 | ವಿ.ಕೆ ಕಲ್ಪನಾ | ---- | ---- | 07.06.2006 | 2009 |
| 3 | ಬಿ.ಕೆ ಬಸವರಾಜು | ---- | ---- | 31.01.2006 | 2009 |
| 4 | ಶಿವಪ್ರಸಾದ್ ಎನ್ | 01.02.2005 | 01.11.2007 | 02.11.2007 | 2009 |
| 5 | ಶ್ರೀನಿವಾಸ ಸಿ | 01.07.2005 | 01.11.2007 | 02.11.2007 | 2009 |
| 6 | ಕೆ.ವಿ ಶ್ರೀನಿವಾಸ ಮೂರ್ತಿ | 01.07.2005 | 31.08.2006 | 01.03.2007 | 2009 |
| 7 | ಎಂ.ಟಿ ರೇವಣ್ಣ | 19.08.2005 | 01.11.2007 | 02.11.2007 | 2009 |
| 8 | ಎಂ. ಶಿವಕುಮಾರ್ | 01.11.2005 | 01.11.2007 | 02.11.2007 | 2009 |
| 9 | ಸುರೇಖಾ ಟಿ.ಎನ್ | 22.08.2005 | 06.12.2007 | 07.12.2007 | 2009 |
| 10 | ಟಿ.ಜೆ ನಾಗರಾಜು | 01.01.2006 | 01.11.2007 | 02.11.2007 | 2009 |
| 11 | ಎಂ.ಪಿ ವಿಜಯಲಕ್ಷ್ಮಿ | 24.05.2006 | 19.11.2007 | 20.11.2007 | 2009 |
| 12 | ಪಿ.ಆರ್ ಗೋಪಾಲ | ---- | ---- | 23.07.2007 | 2009 |
| 13 | ಕೆ.ವಿ ರಘುಪ್ರಸಾದ್ | ---- | ---- | 07.02.2007 | 2009 |
| 14 | ಸಿ.ಜೆ ಸಿದ್ದಲಿಂಗಯ್ಯ | ---- | ---- | 10.03.2008 | 2009 |
| 15 | ಪಿ ಮೋಹನ್ ರಾವ್ | ---- | ---- | 10.03.2008 | 2009 |